## ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1844

ಸದಸ್ಯರ ಹೆಸರು : ಶ್ರೀ ಪಿ.ಆರ್. ರಮೇಶ್ (ನಾಮನಿರ್ದೇಶನ ಹೊಂದಿದವರು)

ಉತ್ತರಿಸುವವರು : ಮಾನ್ಯ ಗಣಿ ಮತ್ತು ಭೂ ವಿಜ್ಞಾನ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಸಚಿವರು

ಉತ್ತರಿಸಬೇಕಾದ ದಿನಾಂಕ : 15-03-2022

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಮಕ್ಕಳ ಸಮಗ್ರ ಅಭಿವೃದ್ಧಿ ಸೇವೆಗಳ (ಐಸಿಡಿಎಸ್) ಯೋಜನೆಯಡಿ ಮಕ್ಕಳು, ಗರ್ಭಿಣಿಯರು, ಹಾಲುಣಿಸುವ ತಾಯಂದಿರಿಗೆ ಕಳಪೆ ಗುಣಮಟ್ಟದ ಆಹಾರ ಪದಾರ್ಥಗಳನ್ನು ಪೂರೈಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; (ವಿವರಗಳನ್ನು ನೀಡುವುದು). | ಅಂಗನವಾಡಿ ಕೇಂದ್ರಗಳಿಗೆ ಗುಣಮಟ್ಟದ ಆಹಾರ ಪದಾರ್ಥಗಳನ್ನು ಸರಬರಾಜು ಮಾಡುವ ಸಂಬಂಧ ಆಹಾರ ಸಾಮಗ್ರಿಗಳು ಸರಬರಾಜಾದ ನಂತರ ಬಾಲವಿಕಾಸ ಸಮಿತಿ, ಇಲಾಖೆಯ ಮೇಲ್ವಿಚಾರಕಿಯರು, ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳು, ಜಿಲ್ಲಾ ನಿರೂಪಣಾಧಿಕಾರಿಗಳು ಹಾಗೂ ಜಿಲ್ಲಾ ಉಪ ನಿರ್ದೇಶಕರು ಇವರುಗಳು ಅಂಗನವಾಡಿ ಕೇಂದ್ರಗಳಿಗೆ ಭೇಟಿ ನೀಡಿ ಪರಿಶೀಲಿಸುತ್ತಿದ್ದಾರೆ. ಬಾಲವಿಕಾಸ ಸಮಿತಿಯ ಸದಸ್ಯರು ಫಲಾನುಭವಿಗಳ ಮನೆಗಳಿಗೆ ಭೇಟಿ ನೀಡಿ ಪೂರಕ ಪೌಷ್ಠಿಕ ಆಹಾರ ತಲುಪಿರುವ ಬಗ್ಗೆ ಖಚಿತಪಡಿಸಿಕೊಳ್ಳುತ್ತಿದ್ದಾರೆ. ಪೂರಕ ಪೌಷ್ಠಿಕ ಆಹಾರವನ್ನು ಫಲಾನುಭವಿಗಳಿಗೆ ವಿತರಿಸುವ ಮುನ್ನ ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳ ಗೋದಾಮಿನಿಂದ ಆಹಾರ ಸುರಕ್ಷತೆ ಮತ್ತು ಗುಣಮಟ್ಟ ಇಲಾಖೆಯ (FSSAI) ಪ್ರಯೋಗಾಲಯಗಳಲ್ಲಿ ರಾಸಾಯನಿಕ ವಿಶ್ಲೇಷಣೆಗೆ ಒಳಪಡಿಸಿ ವರದಿಯನ್ನು ಪಡೆದು, ಗುಣಮಟ್ಟವನ್ನು ಖಚಿತಪಡಿಸಿಕೊಳ್ಳಲಾಗುತ್ತಿದೆ.<br><br>ಕಳಪೆ ಗುಣಮಟ್ಟದಿಂದ ಕೂಡಿರುವ ಆಹಾರ ಪದಾರ್ಥಗಳ ಸರಬರಾಜು ಮಾಡಿರುವ ಎಂ.ಎಸ್.ಪಿ.ಟಿ.ಸಿ. ಗಳ ಮಾಹಿತಿಯು ಬಂದಿದ್ದು, ಅಂತಹ ಎಂ.ಎಸ್.ಪಿ.ಟಿ.ಸಿ ಗಳಿಗೆ ಕಾರಣ ಕೇಳುವ ನೋಟಿಸ್‌ನ್ನು ನೀಡಿ, ಉಪ ನಿರ್ದೇಶಕರಿಂದ ವರದಿ ಪಡೆಯಲಾಗಿದೆ. ಇಂತಹ ಎಂ.ಎಸ್.ಪಿ.ಟಿ.ಸಿ. ಗಳಿಂದ ಆಹಾರ ಪದಾರ್ಥಗಳನ್ನು ಪಡೆಯದಂತೆ ಜಿಲ್ಲಾಧಿಕಾರಿಗಳಿಗೆ ಸೂಚನೆ ನೀಡಲಾಗಿದೆ. |

| | | |
|---|---|---|
| | | ಪ್ರಸ್ತುತ ಕೆಲವು ಎಂ.ಎಸ್.ಪಿ.ಟಿ.ಸಿ. ಗಳು ಉತ್ತಮ ಗುಣಮಟ್ಟದ ಆಹಾರ ಪದಾರ್ಥಗಳನ್ನು ನೀಡಲು ಕ್ರಮ ವಹಿಸಿರುವುದಾಗಿ ತಿಳಿಸಿದ್ದು, ಅಂತಹ ಎಂ.ಎಸ್.ಪಿ.ಟಿ.ಸಿ. ಗಳನ್ನು ಭೇಟಿ ಮಾಡಿ ಜಿಲ್ಲಾಧಿಕಾರಿಗಳು ಶಿಫಾರಸ್ಸು ಮಾಡಿದ ಪ್ರಕರಣಗಳಲ್ಲಿ ಪುನಃ ಆಹಾರ ಸರಬರಾಜು ಮಾಡಲು ಅನುಮತಿಸಿದೆ. |
| ಆ) | ರಾಜ್ಯದ ಅಂಗನವಾಡಿಗಳಲ್ಲಿ ಕಳಪೆ ಆಹಾರ ಪದಾರ್ಥಗಳ ಪೂರೈಕೆ ಕುರಿತು ಸರ್ಕಾರಕ್ಕೆ ಕಳೆದ 5 ವರ್ಷಗಳಲ್ಲಿ ಯಾವುದಾದರೂ ದೂರುಗಳು ಬಂದಿವೆಯೇ; ಬಂದಿದ್ದಲ್ಲಿ, ಸರ್ಕಾರದ ಕ್ರಮವೇನು; (ವಿವರಗಳನ್ನು ನೀಡುವುದು). | ರಾಜ್ಯದ ಅಂಗನವಾಡಿಗಳಲ್ಲಿ ಕಳಪೆ ಆಹಾರ ಪದಾರ್ಥಗಳ ಪೂರೈಕೆ ಕುರಿತು ಜಿಲ್ಲೆಗಳಿಂದ ಸ್ವೀಕೃತವಾದ ವರದಿಯಂತೆ ಬೀದರ್ ಮತ್ತು ತುಮಕೂರು ಜಿಲ್ಲೆಯಿಂದ ತಲಾ ಒಂದು ದೂರು ಸ್ವೀಕೃತವಾಗಿರುತ್ತದೆ.<br><br>ಬೀದರ್ ಜಿಲ್ಲೆಯಲ್ಲಿ ಸ್ವೀಕೃತವಾದ ದೂರನ್ನು ಪರಿಶೀಲಿಸಲಾಗಿದ್ದು, ಆಹಾರ ವಿಶ್ಲೇಷಣಾ ವರದಿಯಂತೆ ಕಳಪೆ ಮಟ್ಟದ ಆಹಾರ ಪದಾರ್ಥಗಳ ಪೂರೈಕೆ ಕಂಡು ಬಂದಿರುವುದಿಲ್ಲ.<br><br>ತುಮಕೂರು ಜಿಲ್ಲೆಯಲ್ಲಿ ತುರುವೇಕೆರೆ ಮತ್ತು ಕುಣಿಗಲ್ ಎಂ.ಎಸ್.ಪಿ.ಟಿ.ಸಿ. ಗಳಲ್ಲಿ ಅಕ್ಕಿಯನ್ನು ಪರಿಶೀಲಿಸಲಾಗಿ, ಕೆಲವು ಚೀಲಗಳಲ್ಲಿ ಕಪ್ಪು ಹುಳುಗಳು ಕಂಡು ಬಂದಿದ್ದು, ಕೂಡಲೇ ಅವುಗಳನ್ನು ಸ್ವಚ್ಛಗೊಳಿಸಲಾಗಿದೆ. ಉತ್ತಮ ಗುಣಮಟ್ಟದ ಆಹಾರ ಪದಾರ್ಥಗಳನ್ನು ನೀಡಲಾಗುತ್ತಿದೆ. |
| ಇ) | ರಾಜ್ಯದ ಅಂಗನವಾಡಿಗಳಲ್ಲಿ ಕಳಪೆ ಆಹಾರ ಪದಾರ್ಥಗಳ ಪೂರೈಕೆ ಕುರಿತು ಸರ್ಕಾರಕ್ಕೆ ನ್ಯಾಯಾಲಯದ ಆದೇಶಗಳು ಬಂದಿವೆಯೇ; ಮತ್ತು ಸರ್ಕಾರದ ಕ್ರಮವೇನು? (ವಿವರ ನೀಡುವುದು). | ರಾಜ್ಯದ ಅಂಗನವಾಡಿಗಳಲ್ಲಿ ಕಳಪೆ ಆಹಾರ ಪದಾರ್ಥಗಳ ಪೂರೈಕೆ ಕುರಿತು ಸರ್ಕಾರಕ್ಕೆ ನ್ಯಾಯಾಲಯದ ಆದೇಶಗಳು ಬಂದಿರುವುದಿಲ್ಲ. |

**ಸಂ:** ಮಮಇ 113 ಐಸಿಡಿ 2022

Halappa A

**(ಆಚಾರ್ ಹಾಲಪ್ಪ ಬಸಪ್ಪ)**
ಗಣಿ ಮತ್ತು ಭೂ ವಿಜ್ಞಾನ, ಮಹಿಳಾ ಮತ್ತು
ಮಕ್ಕಳ ಅಭಿವೃದ್ಧಿ ವಿಕಲಚೇತನರ ಹಾಗೂ
ಹಿರಿಯ ನಾಗರೀಕರ ಸಬಲೀಕರಣ ಸಚಿವರು.